# ಅವರನ್ನು ನಾನು ಹೇಗೆ ಕೂರಿಸಿದೆ?

- **ಗಜೇಂದ್ರ ಕುಮಾರ್ ದೇವಾಂಗನ್**

'ಶಾಲೆ' ಎಂಬ ಪದ ಕಿವಿಗೆ ಬಿದ್ದ ತತ್‌ಕ್ಷಣ, ಅನೇಕ ಶಿಕ್ಷಕರು ಮತ್ತು ಮಕ್ಕಳು ಇರುವ ಕಟ್ಟಡವೊಂದರ ಚಿತ್ರಣ ಮನಸ್ಸಿನಲ್ಲಿ ಮೂಡುತ್ತದೆ. ಹಾಗೇ, ಶಾಲೆಯ ಶೈಕ್ಷಣಿಕ ಚಟುವಟಿಕೆಗಳ ಬಗ್ಗೆ ಮಾತನಾಡುವಾಗ, ತರಗತಿ ಕೋಣೆಯೊಳಗೆ ವ್ಯವಸ್ಥಿತವಾಗಿ ಸಾಲಾಗಿ ಕುಳಿತ ಮಕ್ಕಳು ಮತ್ತು ಅವರ ಮುಂದೆ ನಿಂತಿರುವ ಶಿಕ್ಷಕರ ದೃಶ್ಯ ಸುಳಿಯುತ್ತದೆ. ನಾವು ಎಷ್ಟೋ ಕಾಲದಿಂದ ಇಂತಹುದೇ ಚಿತ್ರಣವನ್ನು ನೋಡುತ್ತಿರುವುದರಿಂದ ಹೀಗೆ ಕಲ್ಪಿಸಿಕೊಳ್ಳುವುದರಲ್ಲಿ ತಪ್ಪೇನಿಲ್ಲ. ಸೂಚನೆಗಳನ್ನು ನೀಡುವುದು, ಚರ್ಚೆ ಮಾಡುವುದು, ಕತೆಗಳನ್ನು ಮತ್ತು ಪದ್ಯಗಳನ್ನು ಹೇಳುವುದು ಅಥವಾ ಆಲಿಸುವುದು, ಬರೆಯುವುದು-ಓದುವುದು, ಬೋಧನೆ-ಕಲಿಕೆಯ ಸಾಮಗ್ರಿಗಳ ಪ್ರದರ್ಶನ ಮತ್ತು ಮೌಲ್ಯಮಾಪನ ಇತ್ಯಾದಿ ಬಹುತೇಕ ಎಲ್ಲ ಚಟುವಟಿಕೆಗಳೂ ಇದೇ ರೀತಿಯ ಕುಳಿತುಕೊಳ್ಳುವ ವ್ಯವಸ್ಥೆಯಲ್ಲಿ ನಡೆಯುತ್ತವೆ. ಈ ರೀತಿಯ ಆಸನ ವ್ಯವಸ್ಥೆಯ ಮಾದರಿಯಲ್ಲಿ ಕೆಲವೊಂದು ಪ್ರಯೋಜನಗಳಿದ್ದರೂ, ಮಕ್ಕಳ ಕಲಿಕಾ ಪ್ರಕ್ರಿಯೆಯ ಮೇಲೆ ನೇರ ಪರಿಣಾಮ ಬೀರುವಂತಹ ನಿಶ್ಚಿತ ನ್ಯೂನತೆಗಳೂ ಇವೆ. ಆಸನ ವ್ಯವಸ್ಥೆಯ ಪರ್ಯಾಯ ಕ್ರಮವನ್ನು ಕುರಿತ ನನ್ನ ಅನುಭವಗಳನ್ನು ನಾನು ಇಲ್ಲಿ ಹಂಚಿಕೊಳ್ಳುತ್ತೇನೆ. ತರಗತಿಯಲ್ಲಿ ಮಕ್ಕಳು ಕುಳಿತುಕೊಳ್ಳುವ ರೀತಿಯ ಮೇಲೆ ಸ್ವಲ್ಪ ಗಮನಹರಿಸಿದರೂ, ಮಕ್ಕಳ ಗ್ರಹಿಕೆ ಮತ್ತು ಕಲಿಕೆಯಲ್ಲಿ ಧನಾತ್ಮಕ ಪರಿಣಾಮವನ್ನು ನಾವು ಕಾಣಬಹುದು. ವಿಶೇಷವಾಗಿ ಶಾಲಾ ವ್ಯವಸ್ಥೆಯ ಆರಂಭಿಕ ವರ್ಷಗಳಲ್ಲಿ ಅಂದರೆ, ಒಂದನೇ ಮತ್ತು ಎರಡನೇ ತರಗತಿಗಳಲ್ಲಿ ಇದು ಪರಿಣಾಮಕಾರಿ. ಭಾಷಾ ಶಿಕ್ಷಕನಾಗಿ, ಮಕ್ಕಳ ಭಾಷಾ ಕೌಶಲ್ಯ ಅಭಿವೃದ್ಧಿಯ ನಿಟ್ಟಿನಲ್ಲಿ ಹಲವು ಬಗೆಯ ಚಟುವಟಿಕೆಗಳಲ್ಲಿ ತೊಡಗಿಸಿಕೊಳ್ಳುವ ಅವಕಾಶ ನನಗೆ ಸಿಕ್ಕಿತ್ತು,

ಅಧ್ಯಾಪನದ ಆರಂಭಿಕ ದಿನಗಳಲ್ಲಿ ನನ್ನ ವಿಧಾನವೂ ಹೆಚ್ಚು ಭಿನ್ನವಾಗಿರಲಿಲ್ಲ. ನನ್ನ ಎಂದಿನ ಕೆಲಸ, ಅನುಭವಗಳು ಮತ್ತು ತರಗತಿಗಳ ಪರಿಸ್ಥಿತಿಗಳಿಗೆ ಸಂಬಂಧಿಸಿದ ಸವಾಲುಗಳ ಆಧಾರದಲ್ಲಿ ಮಕ್ಕಳು ತರಗತಿಯಲ್ಲಿ ಕುಳಿತುಕೊಳ್ಳುವ ಕ್ರಮವನ್ನು ಬದಲಾಯಿಸತೊಡಗಿದೆ. ಬೇರೆ ಬೇರೆ ಚಟುವಟಿಕೆಗಳಿಗೆ ಒಂದು ನಿಶ್ಚಿತ ಮಾದರಿಯಲ್ಲಿ ಕುಳಿತುಕೊಳ್ಳುವಂತೆ ಮಾಡಿದೆ. ಈ ಕ್ರಮವು ತರಗತಿಯ ಮೇಲೆ ನಿಸ್ಸಂದಿಗ್ಧವಾಗಿಯೂ ಒಳ್ಳೆಯ

ಪರಿಣಾಮ ಬೀರಿತು. ಆ ಕೆಲವು ಅನುಭವಗಳನ್ನು ನಿಮ್ಮೊಂದಿಗೆ ಇಲ್ಲಿ ಹಂಚಿಕೊಳ್ಳುತ್ತೇನೆ.

1. **ವೃತ್ತಾಕಾರದಲ್ಲಿ ಕುಳಿತುಕೊಳ್ಳುವ ವ್ಯವಸ್ಥೆ:** ಮಕ್ಕಳನ್ನು ದೊಡ್ಡ ವೃತ್ತದ ಆಕಾರದಲ್ಲಿ ಕುಳಿತುಕೊಳ್ಳುವಂತೆ ಮಾಡುವುದು ಸಾಮಾನ್ಯ ಮಾತುಕತೆಗೆ, ಸೂಚನೆ ನೀಡಲು, ನಿಯಮಗಳನ್ನು ರೂಪಿಸಲು ಅಥವಾ ಚರ್ಚೆಗೆ ಒಳ್ಳೆಯ ಮತ್ತು ಆರಾಮದಾಯಕ ಕ್ರಮ. ಈ ರೀತಿಯ ಆಸನ ಕ್ರಮದಲ್ಲಿ, ಭಾಷಣಕಾರರು ಮತ್ತು ಶ್ರೋತೃಗಳು ಪರಸ್ಪರ ನೇರವಾಗಿ ನೋಡುತ್ತಾ ಸಂವಹನ ನಡೆಸಲು ಅವಕಾಶ ಸಿಗುತ್ತದೆ. ಪ್ರತಿಯೊಬ್ಬರೂ ಒಬ್ಬರನ್ನೊಬ್ಬರು ನೋಡುತ್ತಾ ಮಾತುಗಳನ್ನು ಆಲಿಸಬಹುದು. ತಮ್ಮ ಭಾವನೆಗಳನ್ನು ವ್ಯಕ್ತಪಡಿಸಿ ಇತರರ ಮಾತುಗಳನ್ನು ಕೇಳಿಸಿಕೊಳ್ಳಬಹುದು. ಅಂದರೆ ಯಾವ ಮಗುವೂ ಹಿಂದೆ ಉಳಿಯುವುದಿಲ್ಲ. ಅಲ್ಲದೆ, ಕೆಲವು ಮಕ್ಕಳು ಮುಂಭಾಗದಲ್ಲಿ ಕುಳಿತುಕೊಳ್ಳುವ ಹಾಗೂ ಕೆಲವು ಮಕ್ಕಳು ಹಿಂಭಾಗದಲ್ಲಿ ಕುಳಿತುಕೊಳ್ಳುವ ಸಮಸ್ಯೆಯೂ ಉದ್ಭವವಾಗುವುದಿಲ್ಲ.
2. **ಅರ್ಧ ವೃತ್ತಾಕಾರದಲ್ಲಿ ಕುಳಿತುಕೊಳ್ಳುವ ವ್ಯವಸ್ಥೆ:** ಕತೆ ಮತ್ತು ಪದ್ಯವನ್ನು ಹೇಳಲು ಮತ್ತು ಆಲಿಸಲು ಈ ರೀತಿಯಾಗಿ ಕುಳಿತುಕೊಳ್ಳುವುದು ಸಮರ್ಪಕ. ಈ ಚಟುವಟಿಕೆಯಲ್ಲಿ ಹಾವ-ಭಾವ ಮತ್ತು ಮುಖದ ಅಭಿವ್ಯಕ್ತಿ ಬಹಳ ಮುಖ್ಯ. ಕೇವಲ ಪದಗಳಿಂದ ವ್ಯಕ್ತಪಡಿಸಲಾಗದ, ಹಾವ-ಭಾವದಿಂದ ಪ್ರಸ್ತುತಪಡಿಸಲಾದ ಕಥೆ ಅಥವಾ ಪದ್ಯವನ್ನು ಅರ್ಥೈಸಿಕೊಳ್ಳಲು ಪ್ರತಿಯೊಬ್ಬ ಶ್ರೋತೃವೂ ತನ್ನತ್ತ ಗಮನವಿಟ್ಟು ನೋಡಬೇಕೆಂದು ವಕ್ತೃವು (speaker) ಬಯಸುತ್ತಾನೆ. ಈ ಅವಧಿಯಲ್ಲಿ, ತರಗತಿಗೆ ಪ್ರದರ್ಶಿಸಲಾಗುವ ಸಂದರ್ಭೋಚಿತ ಚಿತ್ರಗಳು ಅಥವಾ ಬೋಧನೆ / ಕಲಿಕೆ ಸಾಮಗ್ರಿಗಳನ್ನು ನೋಡಲು ಪ್ರತಿ ಮಗುವೂ ಅತ್ಯಂತ ಕಾತರವಾಗಿರುತ್ತದೆ. ಈ ರೀತಿಯ ಆಸನ ಕ್ರಮವು ಇಂತಹ ಚಟುವಟಿಕೆಗಳಿಗೆ ಹೇಳಿ ಮಾಡಿಸಿದಂತಿರುತ್ತದೆ. ಒಂದು ವೇಳೆ ತರಗತಿ ದೊಡ್ಡದಾಗಿದ್ದರೆ, ಎರಡು ಅಥವಾ ಹೆಚ್ಚು ಅರ್ಧವೃತ್ತಾಕಾರದ ಸಾಲುಗಳನ್ನು ಒಂದರ ಹಿಂದೆ ಒಂದರಂತೆ ರೂಪಿಸಬಹುದು
3. **ಯು ಆಕಾರದಲ್ಲಿ ಕುಳಿತುಕೊಳ್ಳುವ ವ್ಯವಸ್ಥೆ:** ತರಗತಿಯಲ್ಲಿ ಓದು-ಬರಹಕ್ಕೆ ಸಂಬಂಧಿಸಿದಂತೆ ನಾವು ಬೋಧನೆ / ಕಲಿಕೆ ಸಾಮಗ್ರಿಗಳೊಂದಿಗೆ ಕೆಲಸ ಮಾಡುವಾಗ, ಮೊದಲು ನಾವು ಕೈಗೊಳ್ಳುವ ಪ್ರಕ್ರಿಯೆಯನ್ನು ಪ್ರದರ್ಶಿಸಬೇಕು. ಉದಾಹರಣೆಗೆ, ಕತೆ ಆಧರಿತ ಚಿತ್ರಗಳನ್ನು ಸನ್ನಿವೇಶಗಳಿಗೆ ಅನುಕ್ರಮವಾಗಿ ಜೋಡಿಸುವುದು, ಪದಗಳು ಮತ್ತು ಚಿತ್ರಗಳನ್ನು ಜೋಡಿಸುವುದು, ಅನುಕ್ರಮದಂತೆ ಪದಗಳು ಮತ್ತು

ವಾಕ್ಯಗಳ ಪಟ್ಟಿಯನ್ನು ಜೋಡಿಸುವುದು ಮುಂತಾದವು. ಚಟುವಟಿಕೆಗಳನ್ನು ಪ್ರತಿಯೊಂದು ಮಗುವೂ ಗಮನವಿಟ್ಟು ವೀಕ್ಷಿಸಿ, ಆಲಿಸಬೇಕೆಂದು ನಾವು ಬಯಸುವಾಗ, ಯು ಆಕಾರದಲ್ಲಿ ಕುಳಿತುಕೊಳ್ಳುವ ಕ್ರಮವು ಸಹಕಾರಿಯಾಗುತ್ತದೆ. ನಡೆಯುತ್ತಿರುವ ಚಟುವಟಿಕೆಯನ್ನು ಪ್ರತಿ ಮಗುವೂ ಸ್ಪಷ್ಟವಾಗಿ ವೀಕ್ಷಿಸುತ್ತಾ, ಕೇಳಿಸಿಕೊಳ್ಳಲು ಸಾಧ್ಯವಾಗುತ್ತದೆ. ಅಲ್ಲದೆ, ಪೂರಕ ಸಾಮಗ್ರಿಗಳನ್ನು ಜೋಡಿಸಿಟ್ಟುಕೊಂಡು ಸಂದರ್ಭೋಚಿತವಾಗಿ ಪ್ರದರ್ಶಿಸಲು ಬೇಕಾದಷ್ಟು ಸ್ಥಳಾವಕಾಶವೂ ಶಿಕ್ಷಕರಿಗೆ ಸಿಗುತ್ತದೆ.

4. **ಒತ್ತೊತ್ತಾಗಿ ಕುಳಿತುಕೊಳ್ಳುವ ವ್ಯವಸ್ಥೆ:** ಕತೆ ಹೇಳುವ ಅವಧಿಯ ಹಾಗೆ ಮಕ್ಕಳು ಒಬ್ಬರ ಪಕ್ಕ ಒಬ್ಬರು ಒತ್ತೊತ್ತಾಗಿ ಕುಳಿತುಕೊಳ್ಳುವ ಅನೇಕ ಸಂದರ್ಭಗಳಿವೆ. ಒಬ್ಬರ ಕಾಲಿನ ಮೇಲೆ ಇನ್ನೊಬ್ಬರ ಕಾಲು ಇರುತ್ತದೆ. ನಾನೂ ಅವರೊಂದಿಗೆ ಕುಳಿತುಕೊಳ್ಳುತ್ತೇನೆ. ಹೀಗೆ ಕೂರಿಸುವುದರಲ್ಲಿ ವಿಶೇಷ ಉದ್ದೇಶವೇನೂ ಇಲ್ಲ. ಮಕ್ಕಳು, ವಿಶೇಷವಾಗಿ ಸಣ್ಣ ಮಕ್ಕಳು ಶಿಕ್ಷಕರಿಗೆ ನಿಕಟವಾಗಿ ಕುಳಿತುಕೊಳ್ಳುವುದನ್ನು ಬಯಸುತ್ತಾರೆ. ಶಿಕ್ಷಕರೊಂದಿಗೆ ಮಾತನಾಡಬಹುದು ಎಂಬುದಷ್ಟೇ ಇದರ ಉದ್ದೇಶ. ಶಿಕ್ಷಕರು ತಂದಿರುವ ಪ್ರದರ್ಶನ ಸಾಮಗ್ರಿಗಳನ್ನು ಸಾಧ್ಯವಾದಷ್ಟು ತ್ವರಿತವಾಗಿ ನೋಡುವ ಉದ್ದೇಶವೂ ಇರುತ್ತದೆ ಎನ್ನಿ. ಮಕ್ಕಳ ಜೊತೆಗೇ ಕುಳಿತುಕೊಳ್ಳುವುದರಿಂದ ಶಿಕ್ಷಕರು ಸಹ ಮಕ್ಕಳಿಗೆ ಹತ್ತಿರವಾಗುತ್ತಾರೆ. ಹೀಗೆ ಕುಳಿತುಕೊಳ್ಳುವುದು ಸಂತೋಷದ ಸಂಗತಿ. ಮಕ್ಕಳು ತಮಗೆ ನಿಕಟವಾಗಿರುವುದರಿಂದ, ಶಿಕ್ಷಕರು ಜೋರು ದನಿಯಲ್ಲಿ ಮಾತನಾಡಬೇಕೆಂದಿಲ್ಲ ಅಲ್ಲದೆ, ಕತೆಯ ಪ್ರಸಂಗಗಳಿಗೆ ಅನುಗುಣವಾಗಿ ಧ್ವನಿಯಲ್ಲಿ ಏರುಪೇರು, ಹಾವಭಾವಗಳನ್ನು ಪ್ರದರ್ಶಿಸಲೂ ಸುಲಭ. ಆದರೆ ದೀರ್ಘಾವಧಿಯವರೆಗೆ ಹೀಗೆ ಕುಳಿತುಕೊಳ್ಳಲು ಸಾಧ್ಯವಿಲ್ಲ.
5. **ಗುಂಪಾಗಿ ಕುಳಿತುಕೊಳ್ಳುವ ವ್ಯವಸ್ಥೆ:** ಒಂದನೇ ಮತ್ತು ಎರಡನೇ ತರಗತಿಗಳಲ್ಲಿ, ಚಿತ್ರ ಬಿಡಿಸುವ, ಚಿತ್ರಗಳ ಬಗ್ಗೆ ಚರ್ಚಿಸುವ ಮತ್ತು ಅಕ್ಷರಗಳು ಹಾಗೂ ಪದಗಳನ್ನು ಜೋಡಿಸುವ ಚಟುವಟಿಕೆಗಳನ್ನು ಅನುಕ್ರಮವಾಗಿ ನಾವು ಮಾಡುತ್ತೇವೆ. ಇವುಗಳನ್ನು ಸಣ್ಣ ಗುಂಪುಗಳಲ್ಲಿ ಮಾಡುವುದು ಅನುಕೂಲಕರ. ಹೀಗೆ ಕುಳಿತುಕೊಳ್ಳುವ ವ್ಯವಸ್ಥೆಯಿಂದ ಮಕ್ಕಳಿಗೆ ಒಟ್ಟಿಗೆ ಕಲಿಯುವ ಅವಕಾಶವು ದೊರೆಯುತ್ತದೆ. ಆದರೆ ಒಂದೊಂದು ಗುಂಪಿನಲ್ಲಿ ಎಷ್ಟು ಮಕ್ಕಳಿರಬೇಕು ಎಂಬುದನ್ನು ನಾವು ಮನಸ್ಸಿನಲ್ಲಿಟ್ಟು ಕೊಳ್ಳಬೇಕಾಗುತ್ತದೆ. ನಾನು ಈ ಚಟುವಟಿಕೆಗಳನ್ನು ತರಗತಿಗಳಲ್ಲಿ ನಿಯತವಾಗಿ ಮಾಡುತ್ತಿರುವ ಕಾರಣ ಒಂದೊಂದು ಗುಂಪಿನಲ್ಲಿ ನಾಲ್ಕರಿಂದ ಐದು ಮಕ್ಕಳು ಇರುವುದು ಸೂಕ್ತ ಎಂದು ನನಗೆ ಅನಿಸುತ್ತದೆ. ಒಂದು ತರಗತಿಯಲ್ಲಿ 30 ಮಕ್ಕಳಿದ್ದರೆ ಆರು ಗುಂಪುಗಳ

ಎರಡು ಸಾಲು ಮಾಡಿದರೆ ಚಟುವಟಿಕೆಗಳನ್ನು ಆರಾಮವಾಗಿ ಮಾಡಬಹುದು.

6. **ಹಸಿರು ಹಲಗೆಯತ್ತ ಮುಖಮಾಡಿ ಕುಳಿತುಕೊಳ್ಳುವ ವ್ಯವಸ್ಥೆ:** ಒಂದು ವೇಳೆ ಶಿಕ್ಷಕರು, ಹಸಿರು ಹಲಗೆಯ ಮೇಲೆಯೇ ಬಹುತೇಕ ಕೆಲಸಗಳನ್ನು ಮಾಡುವ ಸನ್ನಿವೇಶವಿದ್ದರೆ ಮಕ್ಕಳು ಹಲಗೆಯನ್ನು ಸ್ಪಷ್ಟವಾಗಿ ನೋಡುವುದು ಅವಶ್ಯ. ಹಲಗೆ ಮತ್ತು ಮಕ್ಕಳ ನಡುವಿನ ದೂರವು ಸರಿಯಾದ ಪ್ರಮಾಣದಲ್ಲಿದ್ದು, ಅವರು ಉಪಯುಕ್ತ ರೀತಿಯಲ್ಲಿ ಕೂರತಕ್ಕದ್ದು. ಮಕ್ಕಳ ನಡುವಿನ ಅಂತರದಲ್ಲಿ ಯಾವುದೇ ಅವ್ಯವಸ್ಥೆಯಿಲ್ಲದೆ, ಅವರ ಯಾವುದೇ ಚಲನವಲನವು ಶಿಕ್ಷಕರಿಗೆ ಕಾಣುವಂತಿರಬೇಕು. ಮಕ್ಕಳು ಹಲಗೆಯತ್ತ ಮುಖಮಾಡಿ ಓದುವ, ಬರೆಯುವ ಚಟುವಟಿಕೆಗಳನ್ನು ಮಾಡುವಂತಿದ್ದಲ್ಲಿ, ಅವರನ್ನು ಬೇರೆ ಬೇರೆ ರೀತಿಯಲ್ಲಿ ಕೂರಿಸಲು ಪ್ರಯತ್ನಿಸಿದ್ದೇನೆ. ಉದಾಹರಣೆಗೆ, ಓದುವ ಅವಧಿಯಲ್ಲಿ ಮಕ್ಕಳ ನಡುವಿನ ಅಂತರವನ್ನು ಕಡಮೆಗೊಳಿಸಿ, ಬರವಣಿಗೆ ಕೆಲಸವಿದ್ದಾಗ, ತಮ್ಮ ನೋಟ್‌ಬುಕ್‌ಗಳು ಅಥವಾ ಸ್ಲೇಟುಗಳನ್ನು ಆರಾಮದಾಯಕವಾಗಿ ಇಟ್ಟುಕೊಳ್ಳಲು ಮತ್ತು ಆರಾಮದಾಯಕವಾಗಿ ಕುಳಿತುಕೊಳ್ಳಲು ಅನುವಾಗುವಂತೆ ಮಕ್ಕಳು ಪ್ರತ್ಯೇಕವಾಗಿ ಕುಳಿತುಕೊಳ್ಳುವ ನಿಟ್ಟಿನಲ್ಲಿ, ಅವರ ಅಂತರವು ಕೊಂಚ ಹೆಚ್ಚಾಗಿರುತ್ತದೆ. ಅಂದಂದಿನ ಚಟುವಟಿಕೆಗಳನ್ನು ಮೊದಲೇ ನಿರ್ಧರಿಸಿದರೆ ಮಕ್ಕಳ ಆಸನ ಕ್ರಮದ ಯೋಜನೆಯು ಸುಲಭವಾಗುತ್ತದೆ. ಈ ರೀತಿಯ ವ್ಯವಸ್ಥೆಯಲ್ಲೂ, ಸಾಲಿನಲ್ಲಿ ಕೂರಬೇಕು ಎಂದು ನಾನೆಂದಿಗೂ ಪಟ್ಟು ಹಿಡಿಯುತ್ತಿರಲಿಲ್ಲ. ಮಕ್ಕಳು ಕುಳಿತುಕೊಳ್ಳುವ ಕ್ರಮ ಆರಾಮವಾಗಿರಬೇಕು, ಹಸಿರು ಹಲಗೆಯು ಸ್ಪಷ್ಟವಾಗಿ ಕಾಣುವಂತಿರಬೇಕು ಹಾಗೂ ಎಲ್ಲ ಮಕ್ಕಳು ನನಗೆ ಕಾಣುವಂತಿರಬೇಕು ಎಂದು ನಾನು ನಂಬುತ್ತೇನೆ. ಈ ಆಸನ ವ್ಯವಸ್ಥೆಯನ್ನು ಅನುಸರಿಸುವಾಗ, ಖಂಡಿತವಾಗಿಯೂ, ಪ್ರತಿಯೊಬ್ಬ ವಿದ್ಯಾರ್ಥಿಯ ಜಾಗವನ್ನು ಸರದಿಯಂತೆ ಬದಲಾಯಿಸಲು ನಾನು ಮರೆಯುವುದಿಲ್ಲ. ಅವರು ಸದಾ ಒಂದು ನಿಗದಿತ ಜಾಗದಲ್ಲಿ ಕೂರಬೇಕೆಂದೇನಿಲ್ಲ.

7. **ಎತ್ತರಕ್ಕೆ ಅನುಗುಣವಾಗಿ ಕುಳಿತುಕೊಳ್ಳುವ ವ್ಯವಸ್ಥೆ:** ಕೆಲವೊಮ್ಮೆ ನಮ್ಮ ತರಗತಿಗಳಲ್ಲಿ ಕೆಲವು ಮಕ್ಕಳ ಕಲಿಕೆ ಮತ್ತು ಅವರಿಗೆ ಉತ್ತಮ ಗ್ರಹಿಕೆಯನ್ನು ಒದಗಿಸಲು ನಾವು ವಿಶೇಷ ಗಮನಕೊಡಬೇಕಾದ ಪರಿಸ್ಥಿತಿ ಎದುರಾಗುವುದುಂಟು. ಅವರಿಗಾಗಿ ವಿಭಿನ್ನ ಕಾರ್ಯತಂತ್ರವನ್ನು ಅನುಸರಿಸಬೇಕಾಗುತ್ತದೆ ಹಾಗೂ ಅವರಿಗೆ ವಿಶೇಷ ಒತ್ತುನೀಡಿ ಅಭ್ಯಾಸ ಮಾಡಿಸಬೇಕಾಗುತ್ತದೆ. ಅಂತಹ ಮಕ್ಕಳನ್ನೇ ಒಂದು ಗುಂಪಾಗಿಸಿ ಅವರೊಂದಿಗೆ ತೊಡಗಿಕೊಳ್ಳುತ್ತೇವೆ. ಒಂದು ವೇಳೆ ಐದು ಅಥವಾ ಆರು

ಅಥವಾ ಹೆಚ್ಚಿನ ಮಕ್ಕಳಿದ್ದರೆ, 2-3 ಮಕ್ಕಳ ಚಿಕ್ಕ ಗುಂಪುಗಳನ್ನು ಮಾಡಲಾಗಿದೆ. ಅವರನ್ನು ತರಗತಿಯಲ್ಲಿ ಸ್ವಲ್ಪ ಹೆಚ್ಚು ಸ್ಥಳಾವಕಾಶ ಕೊಟ್ಟು ಸ್ವತಂತ್ರವಾಗಿ ಕೂರಿಸಬೇಕಾಗುತ್ತದೆ. ಅದರಲ್ಲೇ ಎರಡು ಮುಖ್ಯ ಗುಂಪುಗಳು ಮತ್ತು ಕೆಲವು ಉಪಗುಂಪುಗಳು ಇರುತ್ತವೆ.

ನನ್ನ ಅನುಭವದ ಪ್ರಕಾರ, ಚಿಕ್ಕ ತರಗತಿಗಳಲ್ಲಿ ಒಂದೇ ಪಾಠದ ಅವಧಿಯಲ್ಲಿ (period) ಎರಡರಿಂದ ಮೂರು ಬಗೆಯಲ್ಲಿ ಮಕ್ಕಳನ್ನು ಕೂರಿಸಬೇಕಾಗುತ್ತದೆ. ಮಕ್ಕಳ ಆಸನ ಕ್ರಮವನ್ನು ಬದಲಾಯಿಸುವುದು ಒಂದು ಸವಾಲೇ ಸರಿ. ಸರಿಯಾದ ಮುಂದಾಲೋಚನೆ ಇಲ್ಲದಿದ್ದರೆ ಮತ್ತು ಅದನ್ನು ಅಭ್ಯಾಸ ಮಾಡಿಕೊಳ್ಳದೇ ಇದ್ದರೆ, ಪಾಠ ಮಾಡುವ ಅವಧಿಯಲ್ಲಿ ಹೆಚ್ಚಿನ ಸಮಯ ಆಸನಕ್ರಮ ಬದಲಾಯಿಸುವುದಕ್ಕೇ ವ್ಯರ್ಥವಾದೀತು. ನೆಲದ ಮೇಲೆ ಕುಳಿತುಕೊಳ್ಳುವ ಮಕ್ಕಳ ನಿಟ್ಟಿನಲ್ಲಿ ಈ ವ್ಯವಸ್ಥೆಯನ್ನು ಅನುಸರಿಸುವುದು ಸುಲಭ. ಒಂದನೇ ಮತ್ತು ಎರಡನೇ ತರಗತಿಯಲ್ಲಿ ನೆಲಹಾಸು ಅಥವಾ ಚಾಪೆಯ ಮೇಲೆ ಮಕ್ಕಳನ್ನು ಕೂರಿಸುವುದು ಉತ್ತಮ. ಏಕೆಂದರೆ, ಹೆಚ್ಚು ಸಮಯ ವ್ಯರ್ಥ ಮಾಡದೆ ಸುಲಭವಾಗಿ ಮತ್ತು ವೇಗವಾಗಿ ಮಕ್ಕಳ ಆಸನ ಕ್ರಮವನ್ನು ಬದಲಾಯಿಸಿ ಬಿಡಬಹುದು. ಇದರಿಂದ, ಪೀಠೋಪಕರಣಗಳನ್ನು ಸರಿಸುವ ಸಮಯ ಮತ್ತು ಸದ್ದನ್ನೂ ತಪ್ಪಿಸಬಹುದು.

ಹೀಗೆ, ಸಮರ್ಪಕವಾದ ಮತ್ತು ಚಟುವಟಿಕೆ ಆಧಾರಿತ ಆಸನ ಕ್ರಮವನ್ನು ಅನುಸರಿಸಿದ್ದರಿಂದ ಮಕ್ಕಳೊಂದಿಗೆ ತೊಡಗಿಸಿಕೊಳ್ಳಲು ನನಗೆ ಸುಲಭವಾಗಿದೆ. ಮಕ್ಕಳ ಕಲಿಕೆಯಲ್ಲಿಯೂ ಧನಾತ್ಮಕ ಪರಿಣಾಮವಾಗಿರುವುದು ವೈಯಕ್ತಿಕವಾಗಿ ನನ್ನ ಅನುಭವಕ್ಕೆ ಬಂದಿದೆ. ಮಕ್ಕಳೊಂದಿಗೆ ಸಲೀಸಾಗಿ ಕೆಲಸ ಮಾಡುವುದನ್ನು ಸಾಧ್ಯವಾಗಿಸಿದ ನನ್ನದೇ ಅನುಭವಗಳು ನನಗೆ ಸ್ಫೂರ್ತಿಯಾಗಿವೆ. ತರಗತಿಯಲ್ಲಿ ಬೇರೆ ಬೇರೆ ಆಸನ ಕ್ರಮವನ್ನು ಬಳಸುವುದು ನನ್ನ ಮಟ್ಟಿಗೆ ತರಗತಿಯಪ್ರಕ್ರಿಯೆಯ ನಿಯತ ಮತ್ತು ಅತ್ಯವಶ್ಯ ಭಾಗವಾಗಿದೆ.

ಗಜೇಂದ್ರ ಕುಮಾರ್ ದೇವಾಂಗನ್ ಅವರು ಛತ್ತೀಸ್‌ಗಡದ ಧಾಮ್‌ತರಿಯಲ್ಲಿರುವ ಅಜೀಂಪ್ರೇಮ್‌ಜಿ ಶಾಲೆಯಲ್ಲಿ ಕಳೆದ ಆರು ವರ್ಷಗಳಿಂದ ಶಿಕ್ಷಕರಾಗಿದ್ದಾರೆ. ಅದಕ್ಕೂ ಮೊದಲು ಛತ್ತೀಸ್‌ಗಡದ ಸರ್ಕಾರಿ ಶಾಲೆಯೊಂದರಲ್ಲಿ ಶಿಕ್ಷಕರಾಗಿ ವೃತ್ತಿಜೀವನ ಆರಂಭಿಸಿದ ಅವರು, 12 ವರ್ಷ ಅಲ್ಲಿ ಸೇವೆ ಸಲ್ಲಿಸಿದರು. ಮಕ್ಕಳಿಗಾಗಿ ಕತೆ, ಕವನ

ಬರೆಯುವುದು, ಸಂಗೀತ ಆಲಿಸುವುದು ಮತ್ತು ಚಿತ್ರಕಲೆ ಅವರ ನೆಚ್ಚಿನ ಹವ್ಯಾಸ. ಅವರ ಸಂಪರ್ಕ: gajendra.dewangan@azimpremjifoundation.org